# ಶಿಕ್ಷಾ ಪ್ರೋತ್ಸಾಹನ ಕೇಂದ್ರದೊಡನೆ ನನ್ನ ಅನುಭವ - II

**ಆಂಗ್ಲ ಮೂಲ: ನೀಲೇಶ್ ಮಾಲವೀಯ**

ಮಕ್ಕಳಿಗೆ ಶೈಕ್ಷಣಿಕ ಸಾಹಿತ್ಯ ಮತ್ತು ಅದಕ್ಕೆ ಸಂಬಂಧಿಸಿದ ಇತರ ಸಾಮಗ್ರಿಗಳನ್ನು ನೀಡುವ ಮೂಲಕ ಗ್ರಾಮೀಣ ಭಾಗದ ಜನರಲ್ಲಿ ಓದುವ ಹಾಗೂ ಬರೆಯುವ ಸಂಸ್ಕೃತಿಯ ವಿಕಾಸಕ್ಕಾಗಿ ನಾವು ಮಧ್ಯಪ್ರದೇಶದ ಛಿಂದ್ವಾಡಾ ಜಿಲ್ಲೆಯ ತಾಮಿಯಾ ವಿಕಾಸಖಂಡದ ಸಮುದಾಯದೊಂದಿಗೆ ಮೂರೂವರೆ ವರ್ಷಗಳಷ್ಟು ಕಾಲ ಕಾರ್ಯನಿರತರಾಗಿದ್ದೆವು. ತನ್ಮೂಲಕ ಗ್ರಾಮಗಳ ಶಿಕ್ಷಿತ ತರುಣರು ಹಾಗೂ ತರುಣಿಯರು ಮಕ್ಕಳಿಗೆ ನೆರವಾಗುವುದನ್ನು, ಪೋಷಕರು ಮಕ್ಕಳನ್ನು ಸರಿಯಾಗಿ ಬೆಳೆಸಿ, ದಿನನಿತ್ಯ ಅವರನ್ನು ಶಾಲೆಗೆ ಕಳುಹಿಸುವುದನ್ನು ಖಾತ್ರಿಪಡಿಸಿಕೊಂಡೆವು. ಅದೇ ಸಮಯಕ್ಕೆ, ಅಲ್ಲಿನ ಸರ್ಕಾರಿ ಶಾಲೆಗಳಲ್ಲಿ ಮಕ್ಕಳು ಓದಲು, ಬರೆಯಲು ಹಾಗೂ ಶಾಲಾ ಚಟುವಟಿಕೆಗಳಲ್ಲಿ ಉತ್ಸಾಹ, ಆತ್ಮವಿಶ್ವಾಸಗಳ ಕೊರತೆಯಿಲ್ಲದೆ ಭಾಗವಹಿಲು ಸಾಧ್ಯವಾಗುವಂತೆ ಸೌಹಾರ್ದಯುತ ವಾತಾವರಣವೊಂದನ್ನು ಹುಟ್ಟುಹಾಕಲು ಪ್ರಯತ್ನಿಸಿದೆವು. ಈ ರೀತಿ, ಅಲ್ಲಿನ ಸಮುದಾಯ ಹಾಗೂ ಶಾಲಾ ಶಿಕ್ಷಕರ  ನಡುವೆ ಸಂಬಂಧವೊಂದು ಬೆಸೆಯಿತು. ಗ್ರಾಮದ ತರುಣ-ತರುಣಿಯರು ಸ್ವತಃ ಕಲಿತು ತಮ್ಮ ತಮ್ಮ-ತಂಗಿಯರಿಗೆ ಹಾಗೂ ಗ್ರಾಮದ ಇತರ ಮಕ್ಕಳಿಗೆ ಕಲಿಸಲಾಗುವಂತೆ, ಗುಣಮಟ್ಟದ ಶಿಕ್ಷಣವೆಂದರೇನು ಎಂಬುದನ್ನು ಅರಿಯುವಂತೆ ಗ್ರಾಮದ ತರುಣ-ತರುಣಿಯರನ್ನು ಸಜ್ಜುಗೊಳಿಸಲು ಅಗತ್ಯವಿದ್ದ ಕ್ರಮಗಳನ್ನು ಕೈಗೊಂಡೆವು.

## ಶಿಕ್ಷಾ ಪ್ರೋತ್ಸಾಹನ ಕೇಂದ್ರ ಎಂದರೇನು?

ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಓದುತ್ತಿದ್ದ ಮಕ್ಕಳಿಗೆ ನೆರವಾಗಲು ಏಕಲವ್ಯ ಸಂಸ್ಥೆಯು, ಅಲ್ಲಿನ ಸಮುದಾಯದೊಂದಿಗೆ ಜೊತೆಗೂಡಿ, ಐವತ್ತು ಶಿಕ್ಷಾ ಪ್ರೋತ್ಸಾಹನ್ ಕೇಂದ್ರಗಳನ್ನು ಮೂವತ್ತನಾಲ್ಕು ಗ್ರಾಮಗಳಲ್ಲಿ ತೆರೆಯಿತು. ಈ ಕೇಂದ್ರಗಳು ಗ್ರಾಮದ ಯಾವುದಾದರೊಂದು ಮನೆ ಅಥವಾ ಶಾಲೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದವು. ಶಾಲೆಯಲ್ಲಿನ ಕೇಂದ್ರಗಳು, ಶಾಲೆ ಆರಂಭವಾಗುವ ಮುನ್ನ ಎರಡು ಗಂಟೆಗಳ ಕಾಲ ಕೆಲಸ ನಿರ್ವಹಿಸುತ್ತಿದ್ದವು. ಈ ಕಾರ್ಯಕ್ರಮಕ್ಕೆ ಆ ಹೋಬಳಿಯ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದ ಸುಮಾರು ಮೂವ್ವತ್ತು ಮಕ್ಕಳು ನೋಂದಾಯಿಸಿಕೊಂಡರು. ಈ ಎರಡು ಗಂಟೆಗಳಲ್ಲಿ ಆಲಿಸುವ, ಮಾತನಾಡುವ, ಓದುವ ಹಾಗೂ ಬರೆಯುವಂತಹ ಮಕ್ಕಳ ಭಾಷಾ ಕೌಶಲಗಳಿಗೆ ಮೆರಗು ಕೊಡುವ ಕೆಲಸದ ಜೊತೆಗೆ ಸಂಖ್ಯೆಗಳ ಸಂಕಲನ, ವ್ಯವಕಲನ, ಗುಣಾಕಾರ ಮತ್ತು ಭಾಗಾಕಾರಗಳನ್ನು ಗ್ರಹಿಸಿ ಮಾಡುವ ಕೌಶಲಗಳನ್ನು ತೀಡುವ ತರಬೇತಿಯನ್ನು ಸಹ ನೀಡಲಾಯಿತು.

## ಕೇಂದ್ರದ ನಿರ್ವಾಹಕರ ಆಯ್ಕೆ

ಈ ಐವತ್ತು ಶಿಕ್ಷಾ ಪ್ರೋತ್ಸಾಹನ ಕೇಂದ್ರಗಳ ಜೊತೆಗೆ ಪ್ರತಿಯೊಂದು ಸಮಿತಿಯ ಸದಸ್ಯರೆಲ್ಲರೂ ಕ್ರಮಬದ್ಧವಾಗಿ ಕಾರ್ಯನಿರ್ವಹಿಸುವುದನ್ನು ಖಾತ್ರಿಪಡಿಸುವ ಹೊಣೆಗಾರಿಕೆಯನ್ನು ಸಮುದಾಯದ ಕೆಲ ಸದಸ್ಯರು ಹೊರಲು ಮುಂದಾದರು. ಸಮಿತಿಯು ಹಳ್ಳಿಗಳಲ್ಲಿ ಇದ್ದ ಶಿಕ್ಷಿತ ತರುಣ/ತರುಣಿಯರ ಹೆಸರುಗಳನ್ನು ಕೇಳಿ ಪಡೆದ ಮೇಲೆ, ಸಮಿತಿಯ ಸದಸ್ಯರು ಈ ವಿಷಯವನ್ನು ಚರ್ಚಿಸಿದರು. ಕೇಂದ್ರ ಕಾರ್ಯನಿರ್ವಾಹಕರನ್ನು ಅವರ ನಡವಳಿಕೆಯ, ಅವರ ಶೈಕ್ಷಣಿಕ ಅರ್ಹತೆ ಹಾಗೂ ಮಕ್ಕಳೊಡನೆ ಅವರು ಕೆಲಸಮಾಡಲು ಇರಬೇಕಾದ

ಸಾಮರ್ಥ್ಯಗಳ ಆಧಾರದ ಮೇಲೆ ಆರಿಸಿಕೊಳ್ಳಲಾಯಿತು. ಆಯ್ಕೆಯಾದ ಬಳಿಕ ಕಾರ್ಯನಿರ್ವಾಹಕರಿಗೆ ತಮ್ಮ ಹೊಣೆಗಾರಿಕೆ ಏನು, ಸಂಬಳ ಎಷ್ಟು ಹಾಗೂ ಮಾಸಿಕ ತರಬೇತಿ ಗೋಷ್ಠಿಯಲ್ಲಿ ಭಾಗವಹಿಸುವುದರ ಕುರಿತಾಗಿ ತಿಳಿಸಿಕೊಡಲಾಗುತ್ತಿತ್ತು. ಪ್ರತಿ ತಿಂಗಳೂ ಪೋಷಕರೊಂದಿಗೆ ಸಭೆ ನಡೆಸಲಾಗುತ್ತಿತ್ತು. ಕೇಂದ್ರದ ಸಾಧನೆಗಳನ್ನು, ಅಲ್ಲಿನ ಸಮಸ್ಯೆಗಳನ್ನು, ಅಲ್ಲಿ ನಡೆಯುವ ಕೆಲಸಗಳನ್ನು ಪರಿಶೀಲಿಸುವುದು ಈ ಸಮಿತಿಯ ಹೊಣೆಗಾರಿಕೆಯಾಗಿತ್ತು.

## ತರಬೇತಿ

ಏಕಲವ್ಯ ಸಂಸ್ಥೆಯು ತಾಮಿಯಾದ ಕೇಂದ್ರ ನಿರ್ವಾಹಕರಿಗಾಗಿ ಒಂದು ತಿಂಗಳ ತರಬೇತಿ ಕಾರ್ಯಕ್ರಮವೊಂದನ್ನು ಸಂಯೋಜಿಸಿತು. ಶಿಕ್ಷಣಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಓದಿ, ಅರ್ಥಮಾಡಿಕೊಂಡು, ಅವುಗಳ ಬಗ್ಗೆ ಸಂವಾದಗಳನ್ನು ನಡೆಸಲು ಅವರಿಗೆ ತರಬೇತಿ ನೀಡಲಾಯಿತು. ಮಾರ್ಗದರ್ಶನಕ್ಕಾಗಿ ಭಾಷೆ ಮತ್ತು ಗಣಿತದಲ್ಲಿ ಮೂಲಭೂತ ಸಾಮರ್ಥ್ಯಗಳೆಂದು ಏನನ್ನು ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತು (NCERT) ಗೊತ್ತುಪಡಿಸಿದೆಯೋ ಅದನ್ನು ಅನುಸರಿಸಲಾಯಿತು. ಅವರಿಗೆ ತಮ್ಮ ಕೆಲಸವನ್ನು ಆಯೋಜಿಸಿಕೊಳ್ಳಲು, ಆಟದ ಮೂಲಕ ಕಲಿಸುವ ಬೋಧನೆಯ ವಿಧಾನಗಳಲ್ಲಿ ಭಾಗವಹಿಸಲು ಹಾಗೂ ಬೋಧನಾ ಡೈರಿಯೊಂದನ್ನು ಬರೆಯಲು ತರಬೇತಿ ನೀಡಲಾಯಿತು.

ಸಭೆಗಳು ಶಾಲಾ ಆವರಣದಲ್ಲಿ ಪ್ರತಿ ಶನಿವಾರ ನಡೆಯುತ್ತಿದ್ದವು. ಈ ಸಭೆಗಳಲ್ಲಿ ಚರ್ಚೆಗೆ ಬರುತ್ತಿದ್ದ ವಿಷಯಗಳೆಂದರೆ: ಹಿಂದಿನ ವಾರದುದ್ದಕ್ಕೂ ಆದ ಕೆಲಸದ ವಿವರವಾದ ವರದಿ ಒಪ್ಪಿಸುವುದು ಹಾಗೂ ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳ ಓದು. ಶಾಲೆಯ ಶಿಕ್ಷಕರೂ ಈ ಸಭೆಗಳಲ್ಲಿ ಭಾಗವಹಿಸಿ, ತಮ್ಮ ಅನುಭವಗಳನ್ನು ಹಂಚಿಕೊಳ್ಳುತ್ತಿದ್ದರು. ಮರು ವಾರದ ಯೋಜನೆಯನ್ನು ಕೈಗೊಳ್ಳಲಾಗುತ್ತಿತ್ತು. ಸಭೆಗಳಲ್ಲಿ ಪಾಲ್ಗೊಳ್ಳುತ್ತಿದ್ದವರು ಶಿಕ್ಷಕರ ಸಹಾಯ ಪಡೆದು, ವೈಯಕ್ತಿಕ ಕ್ರಿಯಾಶೀಲತೆ ಬೇಡುವ ಚಟುವಟಿಕೆಗಳಲ್ಲಿ ತೊಡಗುತ್ತಿದ್ದರು.

## ಬೋಧನಾ ವಿಧಾನ

ಕೇಂದ್ರ ಕಾರ್ಯನಿರ್ವಾಹಕರು ಮಕ್ಕಳನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಕಾರ್ಯಕ್ರಮಗಳನ್ನು ಆಯೋಜಿಸುತ್ತಿದ್ದರು. ಅಭಿವೃದ್ಧಿಗೊಳಿಸಬೇಕಾದ ಪರಿಕಲ್ಪನೆಯನ್ನು, ಅದರ ಗುರಿಯನ್ನು, ಅದಕ್ಕಾಗಿ ಯಾವ ಚಟುವಟಿಕೆ / ಆಟ ಸೂಕ್ತ, ಅದನ್ನು ಅನುಸರಿಸಿ ಯಾವ ರೀತಿಯ ಅಭ್ಯಾಸಗಳನ್ನು ಮಾಡಿಸಬೇಕು ಎಂಬುದಕ್ಕೆ ಸಂಬಂಧಿಸಿದ ಸಂಗತಿಗಳನ್ನು ಅವರು ನಿರ್ಧರಿಸುತ್ತಿದ್ದರು. ಅವರು ಮಕ್ಕಳ ಕೆಲಸದ ಮೇಲೆ ನಿಗಾ ಇಟ್ಟು, ಅವರೇನು ಕಲಿತರು ಎಂಬುದನ್ನು ನಿರಂತರ ಮೌಲ್ಯಮಾಪನ ಪತ್ರದ ಮೇಲೆ ಆ ದಿನಾಂಕದ ಅಡಿಯಲ್ಲಿ ದಾಖಲಿಸುತ್ತಿದ್ದರು. ಮಕ್ಕಳು ಮಾಡುವ ತಪ್ಪುಗಳನ್ನೂ ಸಹ ಈ ಮೌಲ್ಯಮಾಪನ ಪತ್ರದ ಮೇಲೆ ನಮೂದಿಸಲಾಗುತ್ತಿತ್ತು. ಮರುದಿನ ಬೆಳಗ್ಗೆ ಅವರೆಲ್ಲರೂ ಆ ಮಗುವು ಆ ಪರಿಕಲ್ಪನೆಯನ್ನು ಕಲಿಯಲು ಸಹಾಯ ಮಾಡಲು ಸಿದ್ಧರಾಗಿ, ಮಗುವಿನೊಂದಿಗೆ ಇದ್ದು, ಕಲಿಕೆಗೆ ಸಂಬಂಧಿಸಿದ ಚಟುವಟಿಕೆಗಳನ್ನು ನಡೆಸುತ್ತಿದ್ದರು.

ಒಂದರಿಂದ ಐದನೇ ತರಗತಿಯವರೆಗಿನ ಎಲ್ಲ 20-25 ಮಕ್ಕಳಿಗೂ ಒಂದೆಡೆ ಒಟ್ಟಾಗಿ ಕುಳಿತುಕೊಳ್ಳುವಂತೆ ಹೇಳಿ, ಮೊದಲ ಗಂಟೆಯನ್ನು ಭಾಷೆಗಾಗಿ ಹಾಗೂ ಎರಡನೇ ಗಂಟೆಯನ್ನು ಗಣಿತಕ್ಕಾಗಿ

ಮೀಸಲಿಡಲಾಗುತ್ತಿತ್ತು. ಕೆಲವೊಮ್ಮೆ ಗಣಿತವನ್ನೇ ಎರಡೂ ಗಂಟೆಗಳ ಕಾಲ ಬೋಧಿಸಿ, ಮರುದಿನವನ್ನು, ಇಡಿಯಾಗಿ, ಭಾಷಾ ಬೋಧನೆಗಾಗಿ ಮುಡುಪಾಗಿಡಲಾಗುತ್ತಿತ್ತು.

ಮಕ್ಕಳು ಭಾಷೆ ಮತ್ತು ಗಣಿತಗಳ ಮೂಲಭೂತ ಕೌಶಲಗಳಲ್ಲಿ ಪರಿಣತರಾಗಲು ಅವರಿಗೆ ನೆರವಾಗಲು ಈ ರೀತಿ ಪ್ರಯತ್ನಿಸಲಾಯಿತು. ಈ ಮೂಲಭೂತ ಸಾಮರ್ಥ್ಯಗಳಲ್ಲಿ ಮಕ್ಕಳು ಪರಿಣತಿ ಗಳಿಸಲು ಏಕಲವ್ಯ ಸಂಸ್ಥೆ ಪ್ರಕಟಿಸಿರುವ "ಪಢೋ-ಲಿಖೋ ಮಜಾ ಕರೋ" ಎಂಬ ಹೊತ್ತಗೆಯನ್ನು ಭಾಷೆಯ ವಿಷಯಕ್ಕೆ ಬಳಸಲಾದರೆ, ಗಣಿತಕ್ಕೆ, ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತಿನ ಪುಸ್ತಕವನ್ನು ಬಳಸಲಾಗುತ್ತಿತ್ತು.

## ಚಟುವಟಿಕೆಗಳ ಉದಾಹರಣೆಗಳು

ಮೊದಲಿಗೆ, ಭಾಷಾ ಕೌಶಲದ ಅಭಿವೃದ್ಧಿಗಾಗಿ ಮಕ್ಕಳ ಪರಿಸರದಿಂದಲೇ ಐದು ಸುಲಭ ಹಾಗೂ ಪರಿಚಿತ ಪದಗಳನ್ನು ಪ್ರತಿ ವಾರವೂ ಆಯ್ಕೆಮಾಡುವುದೆಂದು ತೀರ್ಮಾನಿಸಲಾಯಿತು. ಉದಾಹರಣೆಗೆ, ಪದಗಳು ಲೋಟ, ಬಸ್ಸು, ನಲ್ಲಿ, ಮಾಲೆ, ಒಂದು ಆಗಿದ್ದಿರಬಹುದಾಗಿತ್ತು. ಅವರಿಗೆ ಈ ಪದಗಳನ್ನು, ಅವುಗಳ ಉಚ್ಚಾರಣೆಯನ್ನು ಪರಿಚಯಿಸಿದ ಬಳಿಕ ಅವುಗಳನ್ನು ಬಳಸಿಕೊಂಡು ಹೊಸ ಪದಗಳನ್ನು ಹೊಸೆಯಲಾಗುತ್ತಿತ್ತು. ಬಳಿಕ, ಎಲ್ಲ ಮಕ್ಕಳಿಗೂ ಸುತ್ತಲೂ ವೃತ್ತಾಕಾರದಲ್ಲಿ ಕುಳ್ಳಿರುವಂತೆ ಹೇಳಿ, ಈ ಪದಗಳಿರುವ ಒಂದು ಕಥೆಯನ್ನು ಹೆಣೆದು ಅವರಿಗೆ ಅದನ್ನು ಮುಂದಿನ ಹತ್ತು ನಿಮಿಷಗಳಲ್ಲಿ ನಿರೂಪಿಸಲಾಗುತ್ತಿತ್ತು. ಅನಂತರ, ಕಥೆಯನ್ನು ಕಪ್ಪುಹಲಗೆಯ ಮೇಲೆ ಬರೆದು, ಓದಲಾಗುತ್ತಿತ್ತು. ಅದಾದ ಮೇಲೆ ಬೇರೆ-ಬೇರೆ ಸ್ತರಗಳಲ್ಲಿರುವ ಮಕ್ಕಳನ್ನು ಪುಟ್ಟ-ಪುಟ್ಟ ತಂಡಗಳಲ್ಲಿ ಕುಳ್ಳಿರಿಸಿ, ಪ್ರತಿ ತಂಡದ ಓದುವಿಕೆಯ ಸಾಮರ್ಥ್ಯದ ಸ್ತರಕ್ಕೆ ಅನುಗುಣವಾಗಿ ಕಥೆಯಲ್ಲಿ ಬರುವ ಪದಗಳಲ್ಲಿನ ಅಕ್ಷರೋಚ್ಚಾರಣೆಗಳನ್ನು ಗುರುತಿಸಲು ಹೇಳಿದ ಬಳಿಕ, ಅದರಲ್ಲಿನ ಅಕ್ಷರಗಳು ಮತ್ತು ಮಾತ್ರೆಗಳನ್ನು ಸೇರಿಸಿ ಪದಗಳನ್ನು ಮಾಡುವಂತೆ ಹೇಳಲಾಗುತ್ತಿತ್ತು. ಇವೆಲ್ಲವನ್ನೂ ಚಟುವಟಿಕೆಗಳ ಮೂಲಕ, ಆಟದ ಮೂಲಕ ಹಾಗೂ ಹಲವು ಬೋಧನಾ ಸಾಮಗ್ರಿಗಳನ್ನು ಬಳಸಿಕೊಂಡು ಮಾಡಲಾಗುತ್ತಿತ್ತು. ಇದರಿಂದ ಮಕ್ಕಳು ಪದಗಳನ್ನು ಗುರುತಿಸಲು, ಓದಲು, ಬರೆಯಲು ಹಾಗೂ ಅವುಗಳ ಉಚ್ಚಾರಣೆಗಳನ್ನು ಗುರುತಿಸಲು ಆಗುವಂತೆ ನೋಡಿಕೊಳ್ಳಲಾಗುತ್ತಿತ್ತು.

"ಯಾರು ಬಂದರು, ಯಾರು ಹೋದರು" ಎಂಬ ಮತ್ತೊಂದು ಆಟದಲ್ಲಿ ಮೂರು ಪದಗಳ ಪಟ್ಟಿಗಳನ್ನು ಎಲ್ಲ ಮಕ್ಕಳಿಗೂ ತೋರಿಸಲಾಗುತ್ತಿತ್ತು. ಬಳಿಕ ಅವರಲ್ಲಿ ಒಂದು ಮಗು ಕೋಣೆಯಿಂದ ಹೊರಹೋಗುತ್ತಿತ್ತು. ತೋರಿಸಲಾಗಿದ್ದ ಮೂರು ಪಟ್ಟಿಗಳಲ್ಲಿ ಒಂದನ್ನು ತೆಗೆದು ಅದರ ಸ್ಥಾನದಲ್ಲಿ ಹೊಸದೊಂದು ಪಟ್ಟಿಯನ್ನು ಇಡಲಾಗುತ್ತಿತ್ತು. ಉದಾಹರಣೆಗೆ, "ಬಸ್" ಪಟ್ಟಿಯ ಜಾಗದಲ್ಲಿ "ಒಂದು" ಎಂಬುದನ್ನು ಇಡಲಾಗುತ್ತಿತ್ತು. ಹೊರಗೆ ಹೋದ ಮಗು ಈಗ ಮರಳಿ ಬಂದು, ಹೊಸದಾಗಿ ಇಡಲಾದ ಪಟ್ಟಿಯನ್ನು ಗುರುತಿಸಲು ಪ್ರಯತ್ನಿಸುತ್ತಿತ್ತು. ಬಳಿಕ ಆ ಮಗು ಇಡೀ ತರಗತಿಗೆ "ಬಸ್" ಹೋಗಿ, "ಒಂದು" ಬಂದಿದೆ ಎಂದು ಹೇಳುತ್ತಿತ್ತು.

ಇದಾದ ಮೇಲೆ, ಚಿತ್ರ ಪಟ್ಟಿಗಳ ಮೇಲೆ ತೋರಿಸಿರುವ ಪದಗಳನ್ನು ಅಕ್ಷರ ಮತ್ತು ಮಾತ್ರೆಗಳ ಪಟ್ಟಿಗಳ ಜೋಡಣೆಯ ಮೂಲಕ ರಚಿಸಿ ತೋರಿಸಲಾಗುತ್ತಿತ್ತು. ಉದಾಹರಣೆಗೆ, "ಲೋಟ" ಎಂಬ ಪದವು ಗಟ್ಟಿಯಾಗಿ ಓದಲ್ಪಡುತ್ತದೆ. ಆ ಪದದಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಬಾರಿ ಉಳಿದ ಮಕ್ಕಳು ಚಪ್ಪಾಳೆ ತಟ್ಟಬೇಕಾಗುತ್ತದೆ.

ಉದಾಹರಣೆಗೆ, ಲೋಟ ಎಂಬುದು ಎರಡು ಅಕ್ಷರಗಳಿಂದ ಆಗಿರುವುದರಿಂದ ಮಕ್ಕಳು ಎರಡು ಸಾರಿ ಚಪ್ಪಾಳೆ ತಟ್ಟಬೇಕಾಗುತ್ತದೆ.

ಎಲ್ಲ ಪದಗಳನ್ನೂ, ಒಂದಾದ ಮೇಲೊಂದರಂತೆ ತೆಗೆದುಕೊಳ್ಳುತ್ತಿದ್ದಂತೆ, ಪದಗಳಲ್ಲಿ ಇದ್ದಷ್ಟು ಅಕ್ಷರಗಳಿಗೆ ಅನುಗುಣವಾಗಿ ಮಕ್ಕಳು ಚಪ್ಪಾಳೆ ತಟ್ಟುತ್ತಿದ್ದರು. ಮುಂದಿನ ಚಟುವಟಿಕೆಯಲ್ಲಿ ಮಕ್ಕಳಿಗೆ "ಬಟ್ಟಲು" ಎಂಬ ಪದದಲ್ಲಿನ ಕೊನೆಯ ಅಕ್ಷರವನ್ನು ಗುರುತಿಸಲು ಹೇಳಲಾಗುತ್ತಿತ್ತು. ಬಳಿಕ ಅವರು ಆ ಅಕ್ಷರದೊಂದಿಗೆ ಮೊದಲ್ಗೊಳ್ಳುವ ಇತರ ಪದಗಳನ್ನು ಹೇಳಬೇಕಾಗುತ್ತಿತ್ತು. ಅವರು "ಲ" ಇಂದ ಮೊದಲಾಗುವ ಪದಗಳಾದ "ಲಾಡು", "ಲವಂಗ"ದಂತಹ ಇತರ ಪದಗಳನ್ನು ಮಾಡಬೇಕಾಗುತ್ತಿತ್ತು. ಇದನ್ನು ಅವರ ತರಗತಿಯ ಸಹಪಾಠಿಗಳ ಹೆಸರಿನಲ್ಲಿನ ಅಕ್ಷರಗಳು ಮತ್ತು ಮಾತ್ರೆಗಳಿಗೂ ವಿಸ್ತರಿಸಬಹುದಾಗಿದ್ದು, ಅವುಗಳನ್ನು ಬಳಸಿಕೊಂಡು ಹೊಸ ಪದಗಳನ್ನು ಹೊಸೆದು ಅವನ್ನು ಗಟ್ಟಿಯಾಗಿ ಓದಬಹುದಾಗಿದೆ. ಪದಗಳನ್ನು ಓದಿ, ಅವುಗಳ ಉಚ್ಚಾರಣೆಯನ್ನು ಗುರುತಿಸುವ ಮಕ್ಕಳಿಗೆ ಆ ಚಿತ್ರಗಳ ಬಗ್ಗೆ ಪುಟ್ಟ ವಾಕ್ಯಗಳನ್ನು ರಚಿಸಿ, ಓದುವಂತೆ ಹೇಳಲಾಗುತ್ತಿತ್ತು. ಇದೇ ರೀತಿ ಮುಂದುವರಿದು, ಮುಂದಿನ ಹಂತಕ್ಕೆ ಸಾರಿ, ಕಥೆಯೊಂದರ ಘಟನೆ ಹಾಗೂ ಪಾತ್ರಗಳ ಬಗ್ಗೆ ಬರೆಯಲು ಹೇಳಬಹುದಾಗಿದೆ. ಈ ಚಟುವಟಿಕೆಯ ಬಳಿಕ ಕೇಂದ್ರ ನಿರ್ವಾಹಕರು ಮಕ್ಕಳ ಕೆಲಸವನ್ನು ಪರಿಶೀಲಿಸಿ, ಮಗುವಿಗೆ ಏನನ್ನಾದರೂ ಅರ್ಥಮಾಡಿಕೊಳ್ಳಲು ಕಷ್ಟವಾಯಿತೇ, ಅಥವಾ ಏನನ್ನಾದರೂ ಅರ್ಥಮಾಡಿಕೊಂಡಿಲ್ಲವೇ ಎಂಬುದನ್ನು ನಿರಂತರ ಮೌಲ್ಯಮಾಪನದ ಪತ್ರಗಳಲ್ಲಿ ದಾಖಲಿಸುತ್ತಾರೆ. ಅಂತಹ ಒಂದು ನಿರ್ದಿಷ್ಟ ಕ್ಷೇತ್ರದಲ್ಲಿ ಮಗುವಿಗೆ ನೆರವಾಗಲು ಮುಂದಿನ ಚಟುವಟಿಕೆಯನ್ನು ಆಯೋಜಿಸಲಾಗಿದೆ.

ಗಣಿತ

<u>ಪರಿಮಾಣದ ಕಲ್ಪನೆಯನ್ನು ಅರ್ಥಮಾಡಿಕೊಳ್ಳಲು ಹಾಗೂ ಮಕ್ಕಳು ಕೈಯಲ್ಲಿ ಹಿಡಿಯಬಹುದಾದ ವಸ್ತುಗಳನ್ನು ಕೂಡುವುದು, ಕಳೆಯುವುದರ ಅಭ್ಯಾಸ.</u>

ಮಕ್ಕಳು ಪರಿಮಾಣದ ಪರಿಕಲ್ಪನೆಯನ್ನು ಗ್ರಹಿಸಲಾಗುವಂತೆ ಅವರನ್ನು ವೃತ್ತಕಾರದಲ್ಲಿ ಕುಳ್ಳಿರಿಸಿ, ಒಂದು ನೂರು ಮಣಿಗಳನ್ನು ಎಣಿಸುವಂತೆ ಹೇಳಲಾಗುತ್ತದೆ. ಮಕ್ಕಳು ಒಬ್ಬೊಬ್ಬರಾಗಿ ಎದ್ದು ಬಂದು ಎಣಿಸುತ್ತಾರೆ. ಪುಟ್ಟ ಮಕ್ಕಳು ಒಂದೊಂದಾಗಿ ಎಣಿಸಿದರೆ, ದೊಡ್ಡ ಮಕ್ಕಳು ಎರಡೆರಡು, ಐದೈದು ಅಥವಾ ಹತ್ತತ್ತರಂತೆ ಎಣಿಸುತ್ತಾರೆ. ಈ ಚಟುವಟಿಕೆಯ ಮೂಲಕ ಅವರು ಬಹಳಷ್ಟನ್ನು ಕಲಿಯುತ್ತಾರೆ.

ಬಳಿಕ, ಯಾವುದಾದರೂ ಮಗುವಿಗೆ ಐವತ್ತು ಮಣಿಗಳನ್ನು ಕೊಟ್ಟು, ಹೊರಗೆ ಹೋಗುವಂತೆ ಹೇಳಲಾಗುತ್ತದೆ. ಅದಕ್ಕೆ ನೀಡಲಾದ ಮಣಿಗಳಲ್ಲಿ ಕೆಲವನ್ನು ಬೋಗುಣಿಯೊಂದರಲ್ಲಿ ಬಚ್ಚಿಡಲಾಗುತ್ತದೆ. ಈಗ ಮಗುವಿಗೆ ಒಳಬರುವಂತೆ ಹೇಳಿ, ಅದಕ್ಕೆ ನೀಡಲಾದ ಮಣಿಗಳನ್ನು ಎಣಿಸುವ ಮೂಲಕ ಬೋಗುಣಿಯಲ್ಲಿ ಎಷ್ಟು ಮಣಿಗಳನ್ನು ಬಚ್ಚಿಡಲಾಗಿದೆ ಎಂಬುದನ್ನು ತಿಳಿಸಲು ಹೇಳಲಾಗುತ್ತದೆ.

ಸ್ಥಾನ-ಬೆಲೆ, ಬಿಡಿ, ಹತ್ತು ಮತ್ತು ನೂರರ ಅರ್ಥವನ್ನು ಕಡ್ಡಿಗಳನ್ನು ಕಟ್ಟುಕಟ್ಟುವ ಮೂಲಕ ಮಕ್ಕಳಿಗೆ ದಾಟಿಸಲಾಗುತ್ತದೆ. ಕಟ್ಟುಗಳನ್ನು ಮಕ್ಕಳ ಎದುರು ಇಟ್ಟು, ಅವರಿಗೆ ಆ ಕಟ್ಟುಗಳಿಂದ ನಿರ್ದಿಷ್ಟ ಸಂಖ್ಯೆಯ ಕಡ್ಡಿಗಳನ್ನು ತೆಗೆದುಕೊಡುವಂತೆ ಹೇಳಲಾಗುತ್ತದೆ. ಉದಾಹರಣೆಗೆ, ನಾವೇನಾದರೂ ಅವರಿಗೆ ನಲ್ವತ್ತೈದು ಕಡ್ಡಿಗಳನ್ನು ನೀಡುವಂತೆ ಹೇಳಿದರೆ, ಪ್ರಶ್ನೆಗೆ ಉತ್ತರಿಸುವ ತಂಡವು ಕಡ್ಡಿಯ ನಾಲ್ಕು ಕಟ್ಟುಗಳನ್ನು ಹಾಗೂ ಐದು

ಬಿಡಿ ಕಡ್ಡಿಗಳನ್ನು ನೀಡುತ್ತದೆ. ಬಳಿಕ ಸ್ಥಾನ-ಬೆಲೆ ಪಟ್ಟಿಗಳನ್ನು ಬಳಸಿಕೊಂಡು ಸಂಖ್ಯೆಗಳನ್ನು ರಚಿಸಿ, ಅವುಗಳನ್ನು ಕಪ್ಪುಹಲಗೆಯ ಮೇಲೆ ಬರೆಯಲಾಗುತ್ತದೆ. ಇದಾದ ಮೇಲೆ ಮಕ್ಕಳಿಗೆ ಎರಡು ಸಂಖ್ಯೆಗಳನ್ನು ತೋರಿಸಿ ಅವುಗಳ ನಡುವೆ ಯಾವುದು ದೊಡ್ಡದು, ಯಾವುದು ಚಿಕ್ಕದು ಎಂದು ಗುರುತಿಸಲು ಹೇಳಲಾಗುತ್ತದೆ. ಏತಕ್ಕಾಗಿ ತಾವು ಹೇಳುವ ಸಂಖ್ಯೆ ದೊಡ್ಡದು ಅಥವಾ ಚಿಕ್ಕದು ಎಂಬುದಕ್ಕೆ ಅವರು ಸಮಜಾಯಿಷಿ ಕೊಡಬೇಕಾಗುತ್ತದೆ.

## ಇತರ ಚಟುವಟಿಕೆಗಳು

ಆಗೊಮ್ಮೆ, ಈಗೊಮ್ಮೆ ಎಂಬಂತೆ ಮಕ್ಕಳು ಬೆಳಗ್ಗಿನ ಪ್ರಾರ್ಥನಾಸಭೆ, ಮಕ್ಕಳ ಪತ್ರಿಕೆ ಮತ್ತು ಚಿತ್ರಕಲೆಗಳಂತಹ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಅವರ ಈ ಎಲ್ಲ ಚಟುವಟಿಕೆಗಳೂ ದಾಖಲಾಗುತ್ತವೆ. ಈ ದಾಖಲೆಗಳು ಮತ್ತು ಚಟುವಟಿಕೆಗಳನ್ನು ಆಧರಿಸಿ ಶಿಕ್ಷಕರು ಮಗುವು ಇಡೀ ವರ್ಷದಲ್ಲಿ ಯಾವ ಸಾಮರ್ಥ್ಯಗಳನ್ನು ಗಳಿಸಿದೆ ಎಂಬುದನ್ನು ತೀರ್ಮಾನಿಸುತ್ತಾರೆ. ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಅವರ ಶಿಕ್ಷಕರ ಹಾಗೂ ಪೋಷಕರ ಮಾಹಿತಿಗಾಗಿ, ವರ್ಷಕ್ಕೊಂದು ಬಾರಿ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳಿಗೆ ಪ್ರಗತಿ-ಪತ್ರವನ್ನು ನೀಡಲಾಗುತ್ತದೆ.

ಮಕ್ಕಳ ಅಗತ್ಯಗಳನ್ನು ಮನಸ್ಸಿನಲ್ಲಿ ಇರಿಸಿಕೊಂಡು, ಪ್ರತಿ ಕೇಂದ್ರಕ್ಕೂ, ಶಿಕ್ಷಣವನ್ನು ಕುರಿತಾಗಿ ಸಾಕಷ್ಟು ಸಾಹಿತ್ಯವನ್ನು ಒದಗಿಸಲಾಗುತ್ತದೆ. ಅವುಗಳಲ್ಲಿ ಪದ ಪಟ್ಟಿಗಳು, ಮಾತ್ರಾ ಪಟ್ಟಿಗಳು, ವಾಕ್ಯ ಪಟ್ಟಿಗಳು, ಕವನ ಭಿತ್ತಿಪತ್ರಗಳು, ಕಥಾ ಭಿತ್ತಿಪತ್ರಗಳು, ಕವನ ಮತ್ತು ಕಥೆಗಳಿಂದ ಆಯ್ದ ವಾಕ್ಯ ಅಥವಾ ಪದ ಗುಚ್ಛಗಳು, ಮಕ್ಕಳಿಂದ ರಚಿತವಾದ ಚಿತ್ರಗಳು, ಸ್ಥಳೀಯ ಘಟನೆಗಳ ಸಂಕಲನಗಳು, ಮಕ್ಕಳು ನಿರೂಪಿಸಿರುವ ಕಥಾ ಸಂಕಲನಗಳು, ಸ್ಥಳೀಯ ಕ್ರೀಡೆಗಳು, ಒಗಟುಗಳ ಸಂಗ್ರಹ, ಜಾನಪದ ಸಾಹಿತ್ಯ, ಏಕಲವ್ಯ ಮತ್ತು ಇತರ ಸಂಸ್ಥೆಗಳು ಹೊರತಂದಿರುವ “ಪಢೋ-ಲಿಖೋ ಮಜಾ ಕರೋ” ಮತ್ತು “ಖುಷಿ-ಖುಷಿ” ಸೇರಿರುತ್ತವೆ.

ಕೇಂದ್ರಗಳಲ್ಲಿ ಗಣಿತವನ್ನು ಬೋಧಿಸಲು ಹಾಗೂ ಮಕ್ಕಳು ಪರಿಮಾಣದ ಪರಿಕಲ್ಪನೆಯನ್ನು ಗ್ರಹಿಸಲು ಅನುಕೂಲವಾಗುವಂತೆ ಮಣಿ ಚೌಕ, ಸಂಖ್ಯಾಪಟ್ಟಿಗಳು, ಸ್ಥಾನ-ಬೆಲೆ ಪಟ್ಟಿಗಳು, ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಪರಿಷತ್ತಿನ ಪಠ್ಯಪುಸ್ತಕಗಳು, “ಖುಷಿ-ಖುಷಿ”, ಉರುಟುಗಲ್ಲುಗಳು, ಬೆಂಕಿಕಡ್ಡಿಗಳು ಇತ್ಯಾದಿಗಳು ದೊರೆಯುವಂತೆ ನೋಡಿಕೊಳ್ಳಲಾಗುತ್ತದೆ.

## ಗ್ರಂಥಾಲಯ

ಗ್ರಾಮದಲ್ಲಿ ಓದುವ ಮತ್ತು ಬರೆಯುವ ಸಂಸ್ಕೃತಿಯ ವಿಕಾಸಕ್ಕಾಗಿ ಪ್ರತಿ ಕೇಂದ್ರದಲ್ಲೂ ಗ್ರಂಥಾಲಯವೊಂದನ್ನು ಸುಮಾರು ಇನ್ನೂರು ಪುಸ್ತಕಗಳೊಂದಿಗೆ ಆರಂಭಿಸಲಾಯಿತು. ಮಕ್ಕಳು ಈ ಕೇಂದ್ರಗಳಿಂದ ಪುಸ್ತಕಗಳನ್ನು ಮನೆಗೆ ಒಯ್ದು, ಓದಿ, ಮನೆಮಂದಿಗೆಲ್ಲ ಓದಲು ನೀಡುತ್ತಿದ್ದರು. ಈ ರೀತಿ, ಮಕ್ಕಳಿಗೆ ಮನೆಯಲ್ಲಿ ತಮ್ಮದೇ ಆದ ಗ್ರಂಥಸಂಗ್ರಹವೊಂದನ್ನು ಹೊಂದಲು ಪ್ರೋತ್ಸಾಹ ಕೂಡ ನೀಡಲಾಯಿತು. ಏಕಲವ್ಯ ಸಂಸ್ಥೆ ಹೊರತಂದಿರುವ ಪುಸ್ತಕಗಳನ್ನು ಗ್ರಾಮಗಳಿಗೆ ಕೊಂಡೊಯ್ಯಲಾಯಿತು. ತಮ್ಮ ಮಕ್ಕಳೊಂದಿಗೆ ಬಂದ ಪ್ರತಿ ಪೋಷಕರೂ ಮೂರು-ಮೂರು ಪುಸ್ತಕಗಳನ್ನು ಆರಿಸಿಕೊಂಡರು. ಈ ರೀತಿ ಮನೆಯಲ್ಲಿ ತಮ್ಮದೇ ಆದ ಗ್ರಂಥಾಲಯವೊಂದನ್ನು ನಿರ್ಮಿಸಿಕೊಳ್ಳಲು ಅವರಿಗೆ ನೆರವು ನೀಡಲಾಯಿತು.

ಕೇಂದ್ರ ನಿರ್ವಾಹಕರು ಕೇಂದ್ರಗಳಲ್ಲಿ ದೊರೆಯುತ್ತಿದ್ದ ಪುಸ್ತಕಗಳಿಂದ ಮಕ್ಕಳಿಗೆ ಕಥೆಗಳನ್ನು ಓದುತ್ತಿದ್ದರು. ಮಕ್ಕಳಿಗೂ ಈ ಪುಸ್ತಕಗಳನ್ನು ಓದಲು ನೆರವು ನೀಡಿ, ಉಳಿದವರಿಗೂ ಓದಲು, ಬರೆಯಲು, ಚಿತ್ರಗಳ ಬಗ್ಗೆ ಮಾತನಾಡಲು, ಅಲ್ಲಿರುವ ಕಥೆಗಳಲ್ಲಿನ ಘಟನೆಗಳನ್ನು ಕುರಿತು ಬರೆಯಲು ನೆರವು ನೀಡಲಾಯಿತು. ಒಮ್ಮೆ ಕೆಲವು ಕಥೆಗಳನ್ನು ಬೊಂಬೆಯಾಟದ ಮೂಲಕ ಸಹ ಸಾದರಪಡಿಸಲಾಯಿತು. ಮಕ್ಕಳು ಚಿತ್ರಗಳನ್ನು ನೋಡಲಾಗುವಂತೆ, ಕಥೆ, ಘಟನೆಗಳನ್ನು ಕುರಿತು ಓದಲಾಗುವವಂತೆ ಮಕ್ಕಳೇ ಬರೆದ ಕಥೆಗಳನ್ನು, ಬಿಡಿಸಿದ ಚಿತ್ರಗಳನ್ನು, ಕಲಾಕೃತಿಗಳನ್ನು ಗೋಡೆಗಳ ಮೇಲೆ ಪ್ರದರ್ಶಿಸಲಾಯಿತು. ಮಕ್ಕಳು ಬರೆದ ಕಥೆ, ಬಿಡಿಸಿದ ಚಿತ್ರ ಮತ್ತು ನಿರೂಪಿಸಿದ ಘಟನೆಗಳನ್ನು ತಿಂಗಳಿಗೊಮ್ಮೆ ಕಲೆಹಾಕಿ ಮಕ್ಕಳ ಪತ್ರಿಕೆಯೊಂದನ್ನು ಹೊರತರಲಾಗುತ್ತಿತ್ತು. ಮಕ್ಕಳು ತಮ್ಮ ಪೋಷಕರು ಹೇಳುತ್ತಿದ್ದ ಸ್ಥಳೀಯ ಕಥೆಗಳನ್ನು ಆಲಿಸುತ್ತಿದ್ದು, ಅವುಗಳಲ್ಲಿ ಬರುತ್ತಿದ್ದ ಸ್ಥಳೀಯ ಸಾಂದರ್ಭಿಕತೆಯು ಮಕ್ಕಳಿಗೆ ಓದಲು ಕಲಿಯಲು ನೆರವಾದವು.

## ಸ್ಥಳೀಯ ಸಸ್ಯಸಂಪತ್ತಿನ ಬಗ್ಗೆ ಮಾಹಿತಿ

ಮಕ್ಕಳು ತಮ್ಮ ಪರಿಸರದಲ್ಲಿ ಬೆಳೆಯುವ ಸಸ್ಯಗಳ, ಮರಗಳ ಹೆಸರುಗಳನ್ನು ಬರೆಯುವಂತೆ ಹೇಳಲಾಗುತ್ತಿತ್ತು. ಪೋಷಕರ ಮಾಸಿಕ ಸಭೆಗಳಲ್ಲಿ ಈ ಲೇಖನಗಳನ್ನು ಪೋಷಕರಿಗೆ ಓದಲಾಗುತ್ತಿತ್ತು. ಮರ ಮತ್ತು ಸಸ್ಯಗಳ ಔಷಧೀಯ ಮೌಲ್ಯಗಳನ್ನು ಕುರಿತು ಮಕ್ಕಳು ಬಲು ಚೆನ್ನಾಗಿ ಬರೆದಿದ್ದರು. ಇದು ಅವರಿಗೆ ನಿಸರ್ಗದೊಂದಿಗೆ ಒಡನಾಡುವ ಅವಕಾಶ ಕಲ್ಪಿಸಿಕೊಟ್ಟಿತಲ್ಲದೆ, ಮರ ಮತ್ತು ಸಸ್ಯಗಳ ಪ್ರಯೋಜನಗಳನ್ನು ಅರಿಯುವಂತೆ ಮಾಡಿತು. ಪೋಷಕರೂ ಈ ವಿಷಯವಾಗಿ ತಮಗಿದ್ದ ಜ್ಞಾನವನ್ನು ಹಂಚಿಕೊಂಡು, ಈ ಲೇಖನಗಳ ಮೌಲ್ಯವನ್ನು ವೃದ್ಧಿಸಿದರು. ತದನಂತರ, ಏಕಲವ್ಯ ಸಂಸ್ಥೆಯು ಹೊರತರುವ "ಚಕಮಕ್" ಎಂಬ ಪತ್ರಿಕೆಯಲ್ಲಿ ಈ ಲೇಖನಗಳನ್ನು ಪ್ರಕಟಿಸಲಾಯಿತು. ಪ್ರಕಟಿತ ಲೇಖನಗಳನ್ನು ಬರೆದ ಮಕ್ಕಳಿಗೆ ಉಡುಗೊರೆಯಾಗಿ ಪತ್ರಿಕೆಯ ಪ್ರತಿಗಳನ್ನು ಹಂಚಲಾಯಿತು.

## ಮೇಲಿಂದ-ಮೇಲೆ ನಡೆಯುವ ಪರಿಚಯಾತ್ಮಕ ಭೇಟಿಗಳು

ಪ್ರತಿ ಕೇಂದ್ರದಿಂದ ಮೂರು ಮಂದಿ ಪೋಷಕರು ಮತ್ತು ಮೂರರಿಂದ ಐದನೇ ತರಗತಿಯ ಮೂವರು ಮಕ್ಕಳನ್ನು ಪರಿಚಯಾತ್ಮಕ ಭೇಟಿಗಳಿಗೆ ಕರೆದೊಯ್ದು, ಅವರನ್ನು ಸ್ಥಳೀಯ ಕಾರ್ಖಾನೆಗಳಿಗೆ, ಆರಕ್ಷಕ ಠಾಣೆಗಳಿಗೆ, ಉಷ್ಣ ವಿದ್ಯುತ್ ಸ್ಥಾವರಗಳಿಗೆ, ರೈಲ್ವೇ ನಿಲ್ದಾಣಗಳಿಗೆ, ವಿಜ್ಞಾನ ಕೇಂದ್ರಗಳಿಗೆ, ಸಂಗ್ರಹಾಲಯಗಳಿಗೆ, ಮುದ್ರಣಾಲಯಗಳಿಗೆ, ಉದ್ಯಾನವನಗಳಿಗೆ, ವ್ಯಾಯಾಮ ಶಾಲೆಗಳಿಗೆ, ಜಲಶುದ್ಧೀಕರಣ ಘಟಕಗಳಿಗೆ ಪರಿಚಯಿಸಲಾಗುತ್ತಿತ್ತು. ಅವರು ಸ್ಥಳೀಯ ಕಾನೂನು, ಪುರಾತನ ಸ್ಥಳೀಯ ಸಂಪ್ರದಾಯಗಳು ಹಾಗೂ ವಿದ್ಯುಚ್ಛಕ್ತಿ ಉತ್ಪಾದನೆಗಳ ಬಗ್ಗೆ ಕೂಡ ಕಲಿತರು. ಇಂತಹ ಭೇಟಿಗಳು ಮಕ್ಕಳು ತಮ್ಮ ಸುತ್ತ-ಮುತ್ತಲಿನ ಸಂಗತಿಗಳನ್ನು ಕಲಿಯಲು ಸದವಕಾಶವೊಂದನ್ನು ಕಲ್ಪಿಸಿಕೊಟ್ಟವು. ಮಕ್ಕಳು ಈ ಪರಿಚಯತ್ಮಾಕ ಭೇಟಿಗಳಲ್ಲಿನ ತಮ್ಮ ಅನುಭವಗಳನ್ನು ಕುರಿತು ಬರೆದರು.

## ಬಾಲಮೇಳದ ಸಂಘಟನೆ

ವರ್ಷದ ಉದ್ದಕ್ಕೂ ಮಕ್ಕಳು ಕಲಿತದ್ದನ್ನು ಪ್ರದರ್ಶಿಸಲು ಬಾಲಮೇಳಗಳನ್ನು ಸಂಘಟಿಸಲಾಗುತ್ತದೆ. ಬಾಲಮೇಳಗಳಲ್ಲಿ, ರಸಪ್ರಶ್ನೆ, ಜೇಡಿಮಣ್ಣಿನ ಆಟಿಕೆ ಪ್ರದರ್ಶನ ಹಾಗೂ ಮಕ್ಕಳ ಕಥೆ, ಚಿತ್ರಕಲೆ ಮತ್ತು ಕಲೆಗಳ ಪ್ರದರ್ಶನಗಳಿರುತ್ತವೆ. ಹೊರಾಂಗಣ ಆಟಗಳಾದ ಕುರ್ಚಿ ಹಿಡಿಯುವ ಪಂದ್ಯ, ಖೋ-ಖೋ, ಕಬಡ್ಡಿ ಇತ್ಯಾದಿಗಳನ್ನು ಆಯೋಜಿಸಿ, ಮಕ್ಕಳು ತಮ್ಮ ಪ್ರತಿಭೆಯನ್ನು ಪ್ರದರ್ಶಿಸಲು ಅವಕಾಶ ಕಲ್ಪಿಸಲಾಗುತ್ತದೆ.

## ಗಣಿತದಕ್ಷತೆಯ ಪ್ರದರ್ಶನ

ಬಾಲಮೇಳದಲ್ಲೊಂದು ಸ್ಥಳೀಯ ಮಾರುಕಟ್ಟೆಯ ಪ್ರತಿರೂಪವನ್ನು ನಿರ್ಮಿಸಲಾಗಿತ್ತು. ಹಣದ ಸೋಗಿನಲ್ಲಿ ವ್ಯವಹರಿಸಲಾಗುತ್ತಿದ್ದ ಚೀಟಿಗಳನ್ನು ಬಳಸಿ ಜನ ಈ ಮಾರುಕಟ್ಟೆಯಲ್ಲಿ ಮಕ್ಕಳು ಮಾರುತ್ತಿದ್ದ ವಸ್ತುಗಳನ್ನು ಕೊಂಡರು. ಮಾರಾಟದ ವೇಳೆ ಮಕ್ಕಳೇ ಅಂಗಡಿಗಳನ್ನು ನಿರ್ವಹಿಸಿ, ಹಣಕಾಸಿನ ವ್ಯವಹಾರ ನೋಡಿಕೊಂಡರು.

ಮಕ್ಕಳು, ಪೋಷಕರು ಇಲ್ಲಿ ತಮ್ಮ ಎತ್ತರ, ತೂಕ ನೋಡಿಕೊಂಡು, "ದೇಹ ದ್ರವ್ಯರಾಶಿ ಸೂಚ್ಯಂಕ"ವನ್ನು ಲೆಕ್ಕಹಾಕಿದರು. ತನ್ಮೂಲಕ ಯಾರಿಗೆ ಆರೋಗ್ಯಕರ ಪ್ರಮಾಣವನ್ನು ಮೀರಿದ ಮೈತೂಕ ಇದೆ, ಯಾರಿಗೆ ಇಲ್ಲ ಎಂಬುದನ್ನು ಕಂಡುಕೊಂಡರು.

## ಸಮುದಾಯದ ಸಹಭಾಗಿತ್ವ

ಸ್ಥಳೀಯ ಸಮುದಾಯದೊಂದಿಗೆ ಪ್ರೋತ್ಸಾಹನ ಕೇಂದ್ರದ ಸಭೆಯೊಂದನ್ನು ಪ್ರತಿ ತಿಂಗಳೂ ಯಾವುದಾದರೊಂದು ಸಂಜೆ ನಡೆಸಲಾಗುತ್ತದೆ. ಪೋಷಕರು, ಸಾರ್ವಜನಿಕ ಪ್ರತಿನಿಧಿಗಳು, ಕೇಂದ್ರ ನಿರ್ವಾಹಕರು ಹಾಗೂ ಮಕ್ಕಳು ಈ ಸಭೆಗಳಲ್ಲಿ ಭಾಗವಹಿಸಬಹುದಾಗಿದೆ. ಪೋಷಕರು ತಮ್ಮ ಮಕ್ಕಳ ಕೆಲಸವನ್ನು ಕಣ್ಣಾರೆ ಕಂಡು, ಅವರ ಕಲಿಕೆ ಏನು ಎಂಬುದರ ಪರಿಚಯ ಪಡೆದುಕೊಳ್ಳುತ್ತಾರೆ. ತಮ್ಮ ಮಕ್ಕಳು ಕೇಂದ್ರದ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದರಲ್ಲಿ ಎಷ್ಟು ಕ್ರಮಬದ್ಧರಾಗಿದ್ದರು ಎಂಬುದನ್ನೂ ಕಂಡುಕೊಳ್ಳುತ್ತಾರೆ. ಶೇಕಡಾ ಐವತ್ತಕ್ಕಿಂತ ಕಡಮೆ ಹಾಜರಾತಿ ಇದ್ದ ಮಕ್ಕಳ ಹೆಸರುಗಳನ್ನು ಪೋಷಕರಿಗೆ ತಿಳಿಸಲಾಗುತ್ತದೆ. ಉಳಿದ ಪೋಷಕರು ಮತ್ತು ಮಕ್ಕಳ ಸಹಕಾರ ಪಡೆದು ಈ ಮಕ್ಕಳು ಕ್ರಮಬದ್ಧವಾಗಿ ಪ್ರೋತ್ಸಾಹನ ಕೇಂದ್ರಕ್ಕೆ ಬರುವುದನ್ನು ಖಾತ್ರಿಪಡಿಸಿಕೊಳ್ಳುವ ಪ್ರಯತ್ನಗಳು ನಡೆಯುತ್ತವೆ.

## ಶಾಲೆಯೊಂದಿಗಿನ ಸಂಬಂಧ

ಪ್ರತಿ ವಾರವೂ ಬೇರೆ-ಬೇರೆ ಪ್ರಾಥಮಿಕ ಶಾಲೆಗಳಲ್ಲಿ ಕೇಂದ್ರ ನಿರ್ವಾಹಕರ ಸಭೆಗಳನ್ನು ಆಯೋಜಿಸಲಾಗುತ್ತದೆ. ಸರ್ಕಾರಿ ಶಾಲೆಯ ಶಿಕ್ಷಕರೂ ಸಹ ಈ ಸಭೆಗಳಲ್ಲಿ ಪಾಲ್ಗೊಳ್ಳುತ್ತಾರೆ. ಕೇಂದ್ರ ನಿರ್ವಾಹಕರು ತಮ್ಮ ವಾರದ ವರದಿಯನ್ನು ಅಲ್ಲಿ ಎಲ್ಲರೊಡನೆ ಹಂಚಿಕೊಳ್ಳುತ್ತಾರೆ. ಈ ಸಭೆಗಳಲ್ಲಿ ಮರುವಾರದ ಕಾರ್ಯಕ್ರಮದ ಆಯೋಜನೆಯೂ ನಡೆಯುತ್ತದೆ. ಸಭೆಯೊಂದರಲ್ಲಿ ಗಣಿತ ಪ್ರಶ್ನೆಪತ್ರಿಕೆಯೊಂದಕ್ಕೆ ಪರಿಹಾರಗಳನ್ನು ಪ್ರಸ್ತುತಪಡಿಸಲಾಯಿತು. ಶಿಕ್ಷಣಕ್ಕೆ ಸಂಬಂಧಿಸಿದ ಲೇಖನಗಳಿಂದ ಕೆಲವು ಪುಟಗಳನ್ನು ಓದಿ, ಚರ್ಚಿಸಲಾಯಿತು. ಶಿಕ್ಷಕರೂ ಇದರಲ್ಲಿ ಸಹಭಾಗಿಗಳಾದ್ದರಿಂದ ಅವರು ತಮ್ಮ ಅನುಭವಗಳನ್ನು ಹಂಚಿಕೊಂಡರು. D El Ed ಮತ್ತು B El Ed ವಿದ್ಯಾರ್ಥಿಗಳು ಈ ಕೇಂದ್ರಗಳಿಗೆ ಆಗಿಂದ್ದಾಗೆ ಭೇಟಿ ನೀಡುತ್ತಿದ್ದು, ತಾವು ಓದುತ್ತಿರುವ ತತ್ತ್ವಗಳೇ ಇಲ್ಲಿ ಅನುಷ್ಠಾನಗೊಳ್ಳುವುದನ್ನು ಕಂಡು ಸಂತಸಪಡುತ್ತಾರೆ.

ಪರಿಚಯಾತ್ಮಕ ಭೇಟಿಗೆಂದು ಕೆಲವು ಶೈಕ್ಷಣಿಕ ಸಂಸ್ಥೆಗಳೂ ಭೇಟಿನೀಡಿ, ಈ ರೀತಿಯ ಪ್ರಯತ್ನವನ್ನು ಶ್ಲಾಘಿಸಿ, ಅದರಿಂದ ತಾವೂ ಕಲಿತದ್ದು ಉಂಟು.

## ಪೋಷಕರ ಭೇಟಿಗಳು

ಸರಿಯಾಗಿ ಕೆಲಸ ನಿರ್ವಹಿಸದ ಕೇಂದ್ರಗಳಲ್ಲಿದ್ದ ಮಕ್ಕಳ ಪೋಷಕರನ್ನು ಚೆನ್ನಾಗಿ ಕೆಲಸ ಮಾಡುತ್ತಿದ್ದ ಕೇಂದ್ರಗಳಿಗೆ ಪರಿಚಯಿಸಿ ಅವರು ಮಕ್ಕಳೊಡನೆ ಈ ಕೇಂದ್ರಗಳಲ್ಲಿ ನಡೆಯುತ್ತಿದ್ದ ಕೆಲಸವನ್ನು ಖುದ್ದಾಗಿ ಗಮನಿಸುವಂತೆ, ಅಲ್ಲಿನ ಪೋಷಕರ ಪಾಲ್ಗೊಳ್ಳುವಿಕೆಯನ್ನು ಗಮನಿಸುವಂತೆ, ಮಕ್ಕಳ ಹಾಜರಾತಿ, ತರಗತಿ ಕೋಣೆಯನ್ನು ಸಿಂಗರಿಸಿರುವ ರೀತಿ, ಕಲಿಕಾ ಹಂತಗಳು ಹಾಗೂ ಅವುಗಳ ದಾಖಲಾತಿಗಳನ್ನು ಗಮನಿಸುವಂತೆ ಮಾಡಲಾಗುತ್ತಿತ್ತು. ಪೋಷಕರು ತಮ್ಮ ಗ್ರಾಮದ ಕೇಂದ್ರಕ್ಕೆ ಮರಳಿದಾಗ ಅದನ್ನು ಸುಧಾರಿಸಲು ಪ್ರಯತ್ನಿಸುತ್ತಿದ್ದರು. ಕೇಂದ್ರ ನಿರ್ವಾಹಕರಿಗೆ ತಮ್ಮ ಹೊಣೆಗಾರಿಕೆಯನ್ನು ಪ್ರಾಮಾಣಿಕವಾಗಿ ನಿರ್ವಹಿಸುವಂತೆ ಸಹ ಹೇಳಲಾಗುತ್ತಿತ್ತು. ಪೋಷಕರು ಸಕ್ರಿಯವಾಗಿ ಪಾಲ್ಗೊಳ್ಳುವುದನ್ನು ಖಾತ್ರಿಪಡಿಸಿಕೊಳ್ಳಲು ಅವರನ್ನೂ ಸಹ ಪರಿಚಯಾತ್ಮಕ ಭೇಟಿಗಳಿಗೆಂದು ವಿಭಿನ್ನ ಸಂಸ್ಥೆಗಳಿಗೆ ಕರೆದೊಯ್ಯಲಾಗುತ್ತಿತ್ತು.

## ಸಾಧನೆಗಳ ಕಡೆಗೆ ನೋಟ

ಕಾರ್ಯಕ್ರಮದ ಮೊದಲಿಗೆ, ಮಧ್ಯಭಾಗದಲ್ಲಿ ಹಾಗೂ ಕೊನೆಯಲ್ಲಿ ಆಧಾರ, ಮಧ್ಯಮ ಹಾಗೂ ಸೀಮಾ ಸ್ತರದ ಪರೀಕ್ಷೆಗಳನ್ನು ನಡೆಸಲಾಗುತ್ತಿತ್ತು. ಶಿಕ್ಷಾ ಪ್ರೋತ್ಸಾಹನ ಕೇಂದ್ರಗಳ ಮಧ್ಯಸ್ಥಿಕೆಯಿಂದ ಸರ್ಕಾರಿ ಶಾಲಾ ಮಕ್ಕಳಲ್ಲಿ ಆಗಿರುವ ಬದಲಾವಣೆಗಳನ್ನು ದಾಖಲಿಸಲು ಇದನ್ನು ಮಾಡಲಾಗುತ್ತಿತ್ತು. ಮೂರನೇ ತರಗತಿಯ ವಿದ್ಯಾರ್ಥಿಗಳಿಗೆ ಒಂದನೇ ತರಗತಿಯ ಭಾಷಾ ಮತ್ತು ಗಣಿತ ಪ್ರಶ್ನೆಪತ್ರಿಕೆಗಳನ್ನು ಉತ್ತರಿಸಲು ಹೇಳಿ, ಮೂರನೇ ತರಗತಿಯ ಸ್ತರದ ಬದಲಾವಣೆಗಳನ್ನು ಗಮನಿಸಲಾಗುತ್ತಿತ್ತು.

ತಾಮಿಯಾದ ಮೂವತ್ತೈದು ಪ್ರಾಥಮಿಕ ಶಾಲೆಗಳಲ್ಲಿ ಐವತ್ತು ಕೇಂದ್ರಗಳನ್ನು ತೆರೆದು, ಮೂರು ವರ್ಷಗಳಲ್ಲಿ ಸುಮಾರು ಎಂಬತ್ತೈದು ತರುಣ / ತರುಣಿಯರಿಗೆ ತರಬೇತಿ ನೀಡಲಾಯಿತು. ಇವರು ತಾಮಿಯಾ ವಿಕಾಸಖಂಡದಲ್ಲಿ ಗುಣಮಟ್ಟದ ಶಿಕ್ಷಣದ ಅರ್ಥವನ್ನು ಅಲ್ಲಿಯ ಜನರಲ್ಲಿ ಬಿತ್ತಲು ಸಾಧ್ಯವಾಯಿತು. ತಮ್ಮ ಶಾಲೆಯ ಮಕ್ಕಳಿಗೆ ಬೋಧಿಸಲು ಸರ್ಕಾರಿ ಶಾಲಾ ಶಿಕ್ಷಕರೂ ಸಹ ಈ ತರುಣ / ತರುಣಿಯರ ನೆರವು ಪಡೆದರಲ್ಲದೆ, ಇದಕ್ಕೆ ಪ್ರತಿಯಾಗಿ, ಈ ತರುಣ / ತರುಣಿಯರು ಅವರಿಂದ ಹಲವು ಕೌಶಲಗಳನ್ನು ಕಲಿಯಲು ನೆರವಾದರು. ಹೀಗಾಗಿ, ತಮ್ಮ ಗ್ರಾಮದ ಮಕ್ಕಳಿಗೆ ನೆರವಾಗಬಲ್ಲ, ಗುಣಮಟ್ಟದ ಶಿಕ್ಷಣದ ಅರ್ಥ ಗ್ರಹಿಸಿರುವ ಹಾಗೂ ತಮ್ಮ ಕುಟುಂಬಗಳ ಮತ್ತು ನೆರೆಹೊರೆಯ ಮಕ್ಕಳಿಗೆ ಉತ್ತಮ ಶಿಕ್ಷಣ ನೀಡಿ ಮಕ್ಕಳನ್ನು ಮುಖ್ಯವಾಹಿನಿಯೊಂದಿಗೆ ಬೆಸೆಯುವ ಕಾರ್ಯದಲ್ಲಿ ತೊಡಗಿದ್ದ ಬಹಳಷ್ಟು ಮಂದಿ ಸಂಪನ್ಮೂಲ ವ್ಯಕ್ತಿಗಳು ಈ ಗ್ರಾಮಕ್ಕೆ ದೊರೆಯುವಂತಾಯಿತು.

ನೀಲೇಶ್ ಕುಮಾರ್ ಮಾಲವೀಯ ಅವರು ಹೋಶಂಗಾಬಾದಿನ ಏಕಲವ್ಯ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಪ್ರಾಥಮಿಕ ಶಾಲೆ ಮತ್ತು ಸಮುದಾಯದೊಂದಿಗೆ ಕಾರ್ಯನಿರ್ವಹಿಸಿರುವ ದೀರ್ಘಕಾಲಿಕ ಅನುಭವ ಹೊಂದಿದ್ದಾರೆ. ಇವರನ್ನು ಸಂಪರ್ಕಿಸಬಹುದಾದ ಮಿಂಚಂಚೆ ವಿಳಾಸ: nileshmalviya76@gmail.com

========